# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 641

ಉತ್ತರಿಸಬೇಕಾದ ದಿನಾಂಕ : 17.09.2021.

ಸದಸ್ಯರ ಹೆಸರು : ಶ್ರೀ ಎಂ. ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)

ಉತ್ತರಿಸುವ ಸಚಿವರು : ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯಾದ್ಯಂತ ಯುವ ಸಬಲೀಕರಣ ಕೇಂದ್ರಗಳನ್ನು ಸ್ಥಾಪಿಸಲಾಗಿದೆಯೇ ; ರಾಜ್ಯದ ಯಾವ ಯಾವ ಜಿಲ್ಲಾ ಕೇಂದ್ರಗಳಲ್ಲಿ ಸ್ಥಾಪಿಸಲಾಗಿದೆ ; (ವಿವರ ನೀಡುವುದು) | ಹೌದು. ಯುವ ಸಬಲೀಕರಣ ಕೇಂದ್ರ (ಯುವ ಸ್ಪಂದನ ಕೇಂದ್ರ) ವನ್ನು ರಾಜ್ಯದ 30 ಜಿಲ್ಲೆಯಲ್ಲಿ ಇಲಾಖೆಯ ಕ್ರೀಡಾಂಗಣಗಳಲ್ಲಿ ತೆರೆಯಲಾಗಿದೆ. |
| ಆ. | ಯುವ ಸಬಲೀಕರಣ ಕೇಂದ್ರಗಳ ಗುರಿ ಮತ್ತು ಉದ್ದೇಶಗಳೇನು; ಈ ಯೋಜನೆಗಾಗಿ ಸರ್ಕಾರವು ಒದಗಿಸುತ್ತಿರುವ ಅನುದಾನವೆಷ್ಟು; (ವಿವರ ನೀಡುವುದು) | ಯುವ ಸಬಲೀಕರಣ ಕೇಂದ್ರವು (ಯುವ ಸ್ಪಂದನ ಕೇಂದ್ರ) ಕೆಳಕಾಣಿಸಿದಂತೆ ಉದ್ದೇಶಗಳನ್ನು ಹೊಂದಿರುತ್ತದೆ:<br>1. ಯುವ ಜನರು ಸಬಲರಾಗಲು, ಅವರು ತಮ್ಮಲ್ಲಿನ ಸಾಮರ್ಥ್ಯಗಳನ್ನು ಕಂಡುಕೊಳ್ಳುವಲ್ಲಿ ಅಗತ್ಯ ಪೂರಕ ವಾತಾವರಣ ಮತ್ತು ಸೌಲಭ್ಯಗಳನ್ನು ಒದಗಿಸುವುದು.<br>2. ಯುವ ಜನರು ತಮ್ಮ ಜ್ಞಾನ, ಕೌಶಲ್ಯ, ಸ್ವಭಾವ ಮತ್ತು ನಡವಳಿಕೆಯನ್ನು ಉನ್ನತೀಕರಿಸಿಕೊಳ್ಳಲು ತಮ್ಮನ್ನು ಧನಾತ್ಮಕವಾಗಿ ಬದಲಾಯಿಸಿಕೊಳ್ಳುವಂತೆ ಮಾಡುವುದು.<br>3) ಯುವಜನರು ತಮ್ಮ ಪ್ರತಿಭೆ ಮತ್ತು ಸಾಮರ್ಥ್ಯಕ್ಕೆ ಸೂಕ್ತವಾದ ಶಿಕ್ಷಣ ಹಾಗೂ ಕೌಶಲ್ಯಗಳನ್ನು ಪಡೆಯಲು ಅಗತ್ಯವಾದ ಸಂಪರ್ಕ ಸೇತುವಾಗಿ ಕಾರ್ಯನಿರ್ವಹಿಸುವುದು.<br>4) ಯುವಜನ ಅಭಿವೃದ್ಧಿಗಾಗಿ ಇರುವ ಎಲ್ಲಾ ಕಾರ್ಯಕ್ರಮಗಳ ಪ್ರಯೋಜನ ಪಡೆಯಲು ಯುವಜನರಿಗೆ ಏಕಗವಾಕ್ಷಿ ಕೇಂದ್ರವಾಗಿ ಕಾರ್ಯನಿರ್ವಹಿಸುವುದು. |

| | | |
|---|---|---|
| | | ಈ ಯುವ ಸ್ಪಂದನ ಕಾರ್ಯಕ್ರಮಕ್ಕೆ 2021-22 ನೇ ಸಾಲಿನಲ್ಲಿ ರೂ.250.00 ಲಕ್ಷ ಅನುದಾನವನ್ನು ನಿಮ್ಹಾನ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ. |
| ಇ. | ಹಾಸನ ಜಿಲ್ಲೆಯಲ್ಲಿ ಯುವ ಸಬಲೀಕರಣ ಕೇಂದ್ರ ಸ್ಥಾಪಿಸಿ ಎಷ್ಟು ಜನ ನಿರುದ್ಯೋಗಿಗಳಿಗೆ ಮತ್ತು ವಿದ್ಯಾರ್ಥಿಗಳಿಗೆ ಇಂಟರ್ನ್‌ಶಿಪ್ ತರಬೇತಿ ನೀಡಿ ಉದ್ಯೋಗ ಒದಗಿಸಲಾಗಿದೆ; (ವಿವರ ನೀಡುವುದು) | ಹಾಸನ ಜಿಲ್ಲೆಯ ಯುವ ಸಬಲೀಕರಣ ಕೇಂದ್ರ (ಯುವ ಸ್ಪಂದನ ಕೇಂದ್ರ)ದಲ್ಲಿ ನಿರುದ್ಯೋಗಿಗಳಿಗೆ ಉದ್ಯೋಗವನ್ನು ಹೊರತುಪಡಿಸಿ, 2391 ಯುವಕರು ಮತ್ತು 2162 ಯುವತಿಯರು ಸೇರಿದಂತೆ ಒಟ್ಟು 4553 ಯುವಜನರಿಗೆ ಮಾರ್ಗದರ್ಶನ (Counseling) ವನ್ನು ನೀಡಲಾಗಿದೆ. |
| ಈ. | ನಿರುದ್ಯೋಗಿಗಳನ್ನು ಗುರುತಿಸಿ ಯುವ ಸಬಲೀಕರಣ ಕೇಂದ್ರದ ಮೂಲಕ ಅಗತ್ಯ ತರಬೇತಿಗಳನ್ನು ನೀಡಿ ಅವರ ಕೌಶಲ್ಯಕ್ಕೆನುಗುಣವಾಗಿ ಉದ್ಯೋಗಗಳನ್ನು ದೊರಕಿಸಿಕೊಡಲು ಸರ್ಕಾರವು ಹಮ್ಮಿಕೊಂಡಿರುವ ಯೋಜನೆಗಳೇನು ? (ವಿವರ ನೀಡುವುದು) | ನಿರುದ್ಯೋಗಿಗಳನ್ನು ಗುರುತಿಸಿ ಯುವ ಸಬಲೀಕರಣ ಕೇಂದ್ರದ ಮೂಲಕ ಕೌಶಲ್ಯಕ್ಕೆನುಗುಣವಾಗಿ ಉದ್ಯೋಗಗಳನ್ನು ದೊರಕಿಸಿಕೊಡುವ ಯಾವುದೇ ಯೋಜನೆಗಳು ಇರುವುದಿಲ್ಲ. ಆದರೆ ಅವರನ್ನು ಕೌಶಲ್ಯಾಭಿವೃದ್ಧಿ ಯೋಜನೆಗಳ ಬಗ್ಗೆ ಅರಿವು ಮೂಡಿಸಿ, ಕೌಶಲ್ಯ ತರಬೇತಿ ಪಡೆಯಲು ಪ್ರೇರಪಿಸಲಾಗುತ್ತಿದೆ. |

**ವೈಎಸ್‌ಡಿ-ಇವೈಡಬ್ಲ್ಯೂ/146/2021**

(ಡಾ. ನಾರಾಯಣ ಗೌಡ)
ರೇಷ್ಮೆ, ಯುವ ಸಬಲೀಕರಣ ಮತ್ತು
ಕ್ರೀಡಾ ಸಚಿವರು.